CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೨, ೨೦೦೪ (ಮಾಘ ೨೩, ಶಕ ವರ್ಷ ೧೯೨೫) | ಸಂಚಿಕೆ ೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಪುನಃಶ್ಚೇತನ ಯೋಜನೆ-III ಕ್ಕೆ ನೀಡಿರುವ ಮಂಜೂರಾತಿಯ ಅನುಷ್ಠಾನವನ್ನು ದಿನಾಂಕ: 30.6.2004 ರವರೆಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಅಪಜೀ 171 ಎಫ್‌ಪಿಸಿ 99, ದಿನಾಂಕ: 31.3.2000.
2) ಸರ್ಕಾರದ ಆದೇಶ ಸಂಖ್ಯೆ: ಅಪಜೀ 171 ಎಫ್‌ಪಿಸಿ 99, ದಿನಾಂಕ: 22.5.2000.
3) ಸರ್ಕಾರದ ಆದೇಶ ಸಂಖ್ಯೆ: ಅಪಜೀ 171 ಎಫ್‌ಪಿಸಿ 99, ದಿನಾಂಕ: 1.11.2001.
4) ಸರ್ಕಾರದ ಆದೇಶ ಸಂಖ್ಯೆ: ಅಪಜೀ 26 ಎಫ್‌ಪಿಸಿ 2002, ದಿನಾಂಕ: 11.12.2002.
5) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ಇವರ ಪತ್ರ ಸಂಖ್ಯೆ: ಟಿಇಸಿ-I/ಸಿಆರ್-3/2003-04, ದಿನಾಂಕ: 16/18.7.2003.
6) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರ ಸಂಖ್ಯೆ: A6/CR-319/KSFIC/2001-02 ದಿನಾಂಕ: 8.8.2003.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮವು ಸಾಕಷ್ಟು ಕೆಲಸವಿಲ್ಲದ ಕಾರಣದಿಂದಾಗಿ ಆರ್ಥಿಕ ಮುಗ್ಗಟ್ಟನ್ನು ಅನುಭವಿಸುತ್ತಿರುವುದರಿಂದ ಅದನ್ನು ಪುನಃಶ್ಚೇತನಗೊಳಿಸುವುದಕ್ಕೆ ತೀರ್ಮಾನಿಸಿ, ಮೇಲೆ ಓದಲಾದ (1)ರ ಆದೇಶದಲ್ಲಿ ದಿನಾಂಕ: 1.1.2000 ರಿಂದ 31.3.2000 ರ ಅವಧಿಗೆ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಪುನಃಶ್ಚೇತನ ಯೋಜನೆ-1ನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಏಪ್ರಿಲ್ 2000 ರಿಂದ ಮಾರ್ಚ್ 2001 ರವರೆಗಿನ ಪುನಃಶ್ಚೇತನಾ ಯೋಜನೆ-2ನ್ನು ಅನುಷ್ಠಾನಗೊಳಿಸಲು ಅನುಮತಿ ನೀಡಲಾಯಿತು.

ಯೋಜನೆ 1 ಮತ್ತು 2ರ ಪ್ರಕಾರ ಅವಧಿ 15 ತಿಂಗಳುಗಳು ಅಂದರೆ 1.1.2000 ರಿಂದ 31.3.2001 ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮವು 25,650 ಕ್ಯು.ಮೀಟರ್ ಮರಮುಟ್ಟು (ದಿಮ್ಮಿ), 50,000 ಕ್ಯು.ಮೀಟರ್ ಉರುವಲು ಕಟ್ಟಿಗೆ ಮತ್ತು 1,75,000, ಮೆಟ್ರಿಕ್ ಟನ್ ಪಲ್ಪ್‌ವುಡ್‌ನ್ನು ತೆಗೆದು (ಉತ್ಪಾದಿಸಿ) ಮಾರಾಟ ಮಾಡಬೇಕಾಗಿತ್ತು. ಆದರೆ, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮವು ಪ್ರಸ್ತಾಪಿಸಿದ ಅವಧಿಯಲ್ಲಿ ಕೇಂದ್ರ ಸರ್ಕಾರವು ಕಾರ್ಯಯೋಜನೆಗಳಿಗೆ ಅನುಮೋದನೆ ನೀಡದ ಕಾರಣ ಈ ಯೋಜನೆಯಲ್ಲಿ ನಿಗದಿಪಡಿಸಿದ್ದ ಪ್ರಮಾಣದಲ್ಲಿ ಸಾಮಗ್ರಿಗಳನ್ನು ತೆಗೆಯಲು ಸಾಧ್ಯವಾಗಿರುವುದಿಲ್ಲ. ಆದಕಾರಣ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಪುನಃಶ್ಚೇತನ ಯೋಜನೆ 1 ಮತ್ತು 2 ರ ಅವಧಿಯನ್ನು 31.5.2002 ರವರೆಗೆ ವಿಸ್ತರಿಸಲು ಅನುಮೋದಿಸಲಾಯಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಪುನಃಶ್ಚೇತನ ಯೋಜನೆ-III ನ್ನು ಮೇ 2002 ರಿಂದ ಮೇ 2003 ರವರೆಗೆ ಅನುಷ್ಠಾನಗೊಳಿಸುವುದಕ್ಕೆ ಅನುಮತಿ ನೀಡಲಾಯಿತು.

ಮೇಲೆ ಓದಲಾದ ಕ್ರಮಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ವ್ಯವಸ್ಥಾಪಕ ನಿರ್ದೇಶಕರು, ಯೋಜನೆ-IIIನ್ನು ಸಕಾಲದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗದೇ ಇದ್ದು, ಗುರಿಯಂತೆ ಅದನ್ನು ಪೂರ್ಣಗೊಳಿಸಬೇಕಾಗಿರುವುದರಿಂದ, ಪುನಃಶ್ಚೇತನ ಅವಧಿಯನ್ನು ದಿನಾಂಕ: 30.6.2004 ರವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ಇವರ ಈ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ವಿಷಯವನ್ನು ಸರ್ಕಾರವು ಪರಿಶೀಲಿಸಿದ್ದು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಪುನಃಶ್ಚೇತನ ಯೋಜನೆ-3ರ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 26 ಎಫ್‌ಪಿಸಿ 2002, ಬೆಂಗಳೂರು, ದಿನಾಂಕ: 17ನೇ ಜನವರಿ 2004**

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಪುನಃಶ್ಚೇತನ ಯೋಜನೆ-3ರ ಅವಧಿಯನ್ನು ದಿನಾಂಕ: 30.6.2004 ರವರೆಗೆ ಮಾತ್ರ ವಿಸ್ತರಿಸುವುದಕ್ಕೆ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1659/ವೆಚ್ಚ-2/2003, ದಿನಾಂಕ: 10.12.2003 ರಲ್ಲಿ ನೀಡಿರುವ ಸಹಮತಿಯೊಡನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ವಿ. ಜಯಲಕ್ಷ್ಮಿ**
ಪಿ.ಆರ್. 34 ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಪಾರದರ್ಶಕತೆ ನಿಯಮಗಳ ನಿಯಮ-29(ಬಿ) ಅಡಿ ದಾಖಲಾಗುವ ಟೆಂಡರ್ ಅಪೀಲು ಪ್ರಕರಣಗಳ ಇತ್ಯರ್ಥಕ್ಕೆ ಸಂಬಂಧಿಸಿದಂತೆ - ನಗರಾಭಿವೃದ್ಧಿ ಇಲಾಖೆಯಲ್ಲಿ ಅಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 179 ಸಮನ್ವಯ 2003, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2003**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು, 2000ರ ನಿಯಮ-29(ಬಿ) ಅಡಿ ಸರ್ಕಾರಕ್ಕೆ ನಗರಾಭಿವೃದ್ಧಿ ಇಲಾಖೆಯಲ್ಲಿ ಸಲ್ಲಿಸಲ್ಪಡುವ ಅಪೀಲು ಪ್ರಕರಣಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ-30ರ ಉಪ ನಿಯಮ-2ರ ಪ್ರಕಾರ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಸರ್ಕಾರದ ಕಾರ್ಯದರ್ಶಿಗಳು ರೂ. 50.00 ಲಕ್ಷ ಮತ್ತು ಅದಕ್ಕಿಂತ ಹೆಚ್ಚಿನ ಮೊತ್ತ ಮೌಲ್ಯದ ಟೆಂಡರ್ ಅಪೀಲು ಪ್ರಕರಣಗಳನ್ನು ವಿಲೇವಾರಿ ಮಾಡಲು ಮತ್ತು ಸರ್ಕಾರದ ಅಪರ ಕಾರ್ಯದರ್ಶಿಗಳು/ಜಂಟಿ ಕಾರ್ಯದರ್ಶಿಗಳು/ಉಪಕಾರ್ಯದರ್ಶಿಗಳು ರೂ. 50.00 ಲಕ್ಷ ದವರೆಗಿನ ಮೌಲ್ಯದ ಟೆಂಡರ್ ಅಪೀಲು ಪ್ರಕರಣಗಳನ್ನು ಇತ್ಯರ್ಥಗೊಳಿಸಿ ವಿಲೇವಾರಿ ಮಾಡಲು ಅಧಿಕಾರವನ್ನು ಪ್ರತ್ಯಾಯೋಜಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆಂಪವೀರಯ್ಯ**
ಪಿ.ಆರ್. 35 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ನಗರಾಭಿವೃದ್ಧಿ ಇಲಾಖೆ (ಸಮನ್ವಯ).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಸ್.ಎ. ಕಟ್ಟಿಮನಿ, ಉಪ ತಹಸೀಲ್ದಾರರು ಮತ್ತು ಶ್ರೀ ಐ.ಕೆ. ಬಡೂಡೆಕರ್, ದ್ವಿತೀಯ ದರ್ಜೆ ಸಹಾಯಕ ಇವರ ವಿರುದ್ಧ ಲೋಕಾಯುಕ್ತ ವಿಚಾರಣೆ - ಆರೋಪಗಳಿಂದ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 133 ಬಿಎಂಎಂ 2002, ದಿನಾಂಕ: 31.5.2002.
2) ಮಾನ್ಯ ಲೋಕಾಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್:ಎಆರ್‌ಇ-3) ಇಎನ್‌ಕ್ಯೂ-66: 2002-03, ದಿನಾಂಕ: 18.10.2003.

**ಪ್ರಸ್ತಾವನೆ:**

ಶ್ರೀ ಎಸ್.ಎ. ಕಟ್ಟಿಮನಿ, ಉಪ ತಹಸೀಲ್ದಾರರು ಮತ್ತು ಐ.ಕೆ. ಬಡೋಡೆಕರ್, ದ್ವಿತೀಯ ದರ್ಜೆ ಸಹಾಯಕ, ನಾಡಕಛೇರಿ, ನಿಪ್ಪಾಣಿ ಇವರು ಶ್ರೀಮತಿ ಗೌರಿಬಾಯಿ ಕೋಂ ದಿ. ರಾಮಗೊಂಡ ಪಾಟೀಲ್ ಎಂಬುವವರಿಂದ ಅವರಿಗೆ ಕುಟುಂಬ ಪಿಂಚಣಿ ಮಂಜೂರು ಮಾಡುವ ಸಲುವಾಗಿ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ದಿನಾಂಕ: 19.6.2000 ದಂದು ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿ ಬಿದ್ದಿದ್ದರು. ಈ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14-ಎ ರಡಿ ಯಲ್ಲಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮಸಂಖ್ಯೆ (1) ಸರ್ಕಾರದ ದಿನಾಂಕ: 31.5.2002 ರ ಆದೇಶದಲ್ಲಿ ಗೌ. ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಶ್ರೀ ಎಸ್.ಎ. ಕಟ್ಟಿಮನಿ, ಉಪ ತಹಸೀಲ್ದಾರ್ ಮತ್ತು ಶ್ರೀ ಐ.ಕೆ. ಬಡೋಡೆಕರ್, ದ್ವಿತೀಯ ದರ್ಜೆ ಸಹಾಯಕ, ನಾಡಕಛೇರಿ, ನಿಪ್ಪಾಣಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ಮಾನ್ಯ ಲೋಕಾಯುಕ್ತರು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ಆಪಾದಿತ ನೌಕರರ ಮೇಲಿನ ಆರೋಪಗಳನ್ನು ಸಾಬೀತು ಮಾಡಲು ಸಕಾರಾತ್ಮಕ ಮತ್ತು ನಿರ್ಣಯಾತ್ಮಕವಾದ

ಸಾಕ್ಷ್ಯಾಧಾರಗಳು ದೊರಕಿಲ್ಲದಿರುವುದರಿಂದ, ಆರೋಪಗಳು ಸಾಬೀತಾಗಿಲ್ಲವೆಂದು ಅಭಿಪ್ರಾಯ ತಾಳಿದ್ದಾರೆ. ವಿಚಾರಣಾಧಿಕಾರಿಗಳ ಈ ನಿಲುವನ್ನು ಒಪ್ಪಿ ಸದರಿ ನೌಕರರನ್ನು ಆರೋಪಗಳಿಂದ ಖುಲಾಸೆ ಮಾಡಿ ಅವರ ವಿರುದ್ಧ ಹೂಡಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡಲು ಗೌ. ಲೋಕಾಯುಕ್ತರವರು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಶ್ರೀ ಎಸ್.ಎ. ಕಟ್ಟಿಮನಿ, ಉಪ ತಹಸೀಲ್ದಾರ್ ಮತ್ತು ಶ್ರೀ ಐ.ಕೆ. ಬಡೋಡೆಕರ್, ದ್ವಿತೀಯ ದರ್ಜೆ ಸಹಾಯಕ ನಾಡಕಛೇರಿ, ನಿಪ್ಪಾಣಿ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 133 ಬಿಎಂಎಂ 2002, ಬೆಂಗಳೂರು, ದಿನಾಂಕ: 16ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಶ್ರೀ ಎಸ್.ಎ. ಕಟ್ಟಿಮನಿ, ಉಪ ತಹಸೀಲ್ದಾರ್ ಮತ್ತು ಐ.ಕೆ. ಬಡೋಡೆಕರ್, ದ್ವಿತೀಯ ದರ್ಜೆ ಸಹಾಯಕ, ನಾಡಕಛೇರಿ, ನಿಪ್ಪಾಣಿ ಇವರ ವಿರುದ್ಧ ಮಾಡಲಾದ ಭ್ರಷ್ಟಾಚಾರದ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿಲ್ಲದ ಕಾರಣ ಇವರನ್ನು ಆರೋಪದಿಂದ ಮುಕ್ತರನ್ನಾಗಿಸಿ ಇವರ ವಿರುದ್ಧ ಮಾಡಲಾದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 38

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಸೇವೆಗಳು)

**ವಿಷಯ:** ಚಿಕ್ಕಮಗಳೂರು ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಯಲ್ಲಿ ವಿಲ್ ನಾಮೆಗಳನ್ನೊಳಗೊಂಡ ಲಕೋಟೆಗಳನ್ನು ನಾಶಗೊಳಿಸಿದ ಬಗ್ಗೆ ಅಧಿಕಾರಿ : ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 336 ಇಸೇವಿ 94(ಭಾ), ದಿನಾಂಕ: 10.6.2002.

2) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಸಿಆರ್‌ಪಿ: 43: 94-95, ದಿನಾಂಕ: 16.10.2003.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಚಿಕ್ಕಮಗಳೂರು ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಯಲ್ಲಿ ವಿಲ್ ನಾಮೆಗಳನ್ನೊಳಗೊಂಡ ಲಕೋಟೆಗಳನ್ನು ನಾಶ ಮಾಡಿದ ಬಗ್ಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಕೆ. ಈಶ್ವರ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ ಕೇಂದ್ರ ಸ್ಥಾನ ಸಹಾಯಕರು (ಆಡಳಿತ) ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ ಓದಲಾದ (2) ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ ಕೇಂದ್ರ ಕಛೇರಿ ಕೇಂದ್ರ ಸ್ಥಾನ ಸಹಾಯಕರಿಗೆ (ಆಡಳಿತ) ಹೆಚ್ಚಿನ ಕಾರ್ಯ ಒತ್ತಡದ ಕಾರಣ ಮಂಡನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವುದು ಸಾಧ್ಯವಾಗುತ್ತಿಲ್ಲವಾದ್ದರಿಂದ, ಅವರ ಬದಲಿಗೆ ಜಿಲ್ಲಾ ನೋಂದಣಾಧಿಕಾರಿ ಕಛೇರಿ, ಬೆಂಗಳೂರು ನಗರ ಜಿಲ್ಲೆ ಅವರ ಕೇಂದ್ರ ಸ್ಥಾನ ಸಹಾಯಕರು (ಸಂಘ ಸಂಸ್ಥೆಗಳು) ಅವರನ್ನು ಮಂಡನಾಧಿಕಾರಿಯಾಗಿ ನೇಮಿಸಲು ಶಿಫಾರಸ್ಸು ಮಾಡಿದ್ದಾರೆ. ನೋಂದಣಿ ಮಹಾಪರಿವೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 336 ಇಸೇವಿ 94 (ಪಿ(1)), ಬೆಂಗಳೂರು, ದಿನಾಂಕ: 12ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲಾ ನೋಂದಣಿ ಕಛೇರಿ ಇಲ್ಲಿ ವಿಲ್ ನಾಮೆಗಳನ್ನೊಳಗೊಂಡ ಲಕೋಟೆಗಳನ್ನು ನಾಶಪಡಿಸಿದ ಬಗ್ಗೆ ಅಧಿಕಾರಿ : ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ ಕೇಂದ್ರ ಸ್ಥಾನ ಸಹಾಯಕರು (ಆಡಳಿತ) ಅವರ ಬದಲಿಗೆ ಜಿಲ್ಲಾ ನೋಂದಣಿ ಕಛೇರಿ, ಬೆಂಗಳೂರು ನಗರ ಜಿಲ್ಲೆ ಅವರ ಕೇಂದ್ರ ಸ್ಥಾನ ಸಹಾಯಕರು (ಸಂಘ ಸಂಸ್ಥೆಗಳು) ಇವರನ್ನು ಮಂಡನಾಧಿಕಾರಿಯಾಗಿ ಸರ್ಕಾರವು ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 39

ಪೀಠಾಧಿಕಾರಿ,

ಕಂದಾಯ ಇಲಾಖೆ. (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ನವೋದಯ ವಿದ್ಯಾಸಂಸ್ಥೆ, ಚನ್ನರಾಯಪಟ್ಟಣ ಈ ಸಂಘಕ್ಕೆ ನೇಮಕವಾಗಿದ್ದ, ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುನೋಸೊ 2000, ದಿನಾಂಕ: 16.6.2001.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ನವೋದಯ ವಿದ್ಯಾಸಂಸ್ಥೆ, ಚನ್ನರಾಯಪಟ್ಟಣ, ಈ ಸಂಸ್ಥೆಗೆ ಸಂಘದ ಹಿತದೃಷ್ಟಿಯಿಂದ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ 6 ತಿಂಗಳ ಅವಧಿಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ತದನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 15.12.2003 ರವರೆಗೆ ವಿಸ್ತರಿಸಲಾಗಿದೆ. ದಿನಾಂಕ:

16.12.2003 ರಿಂದ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 57 ಮುನೋಸೊ 2003, ಬೆಂಗಳೂರು, ದಿನಾಂಕ: 8ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ನವೋದಯ ವಿದ್ಯಾಸಂಸ್ಥೆ, ಚನ್ನರಾಯಪಟ್ಟಣ, ಈ ಸಂಸ್ಥೆಗೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 16.12.2003 ರಿಂದ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ. ಈ ವಿಸ್ತರಿಸಿದ ಅವಧಿಯೊಳಗೆ ಸಂಸ್ಥೆಗೆ ಚುನಾವಣೆ ನಡೆಸಿ ಅಧಿಕಾರವನ್ನು ಹಸ್ತಾಂತರಿಸಲು ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಆಡಳಿತಾಧಿಕಾರಿಯವರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್.ಜಿ. ನಾರಾಯಣ

ಪಿ.ಆರ್. 40

ಪೀಠಾಧಿಕಾರಿ,

ಕಂದಾಯ ಇಲಾಖೆ. (ನೋಂದಣಿ ಮತ್ತು ಮುದ್ರಾಂಕ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರವು ಉಡುಪಿ ತಾಲ್ಲೂಕು ಕೊರ್ರಂಗ್ರಪಾಡಿ ಗ್ರಾಮದ ಸ.ನಂ. 10:6ಎ1, 12:1ಎ, 13:1, 4ಎ, 21, 23, 39, 41, 16:1, 2,3,4 17:4ಬಿ2 ಮತ್ತು 76 ಹಾಗೂ ಬಡಗಬೆಟ್ಟು ಗ್ರಾಮದ ಸ.ನಂ. 50:15ಬಿ2 ರಲ್ಲಿಯ ಒಟ್ಟು ವಿಸ್ತೀರ್ಣ 34.56 ಎಕರೆ ಜಮೀನಿನಲ್ಲಿ ವಸತಿ ಬಡಾವಣೆ ನಿರ್ಮಿಸಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ಉನಪ್ರಾ:ವ:ಅ:ಯೋ:ವಿನ್ಯಾಸ:5488:03-04, ದಿನಾಂಕ: 26.7.2003.
2) ನಿರ್ದೇಶಕರು ನಗರ ಯೋಜನಾ ಇಲಾಖೆ ಇವರ ಪತ್ರ ಸಂಖ್ಯೆ: ಸಂ:ನಯೋ(16):25:ಅಯೋ:03, ದಿನಾಂಕ: 21.10.2003.

**ಪ್ರಸ್ತಾವನೆ:**

ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರವು ಉಡುಪಿ ತಾಲ್ಲೂಕು ಕೊರ್ರಂಗ್ರಪಾಡಿ ಗ್ರಾಮದ ಸ.ನಂ. 10:6ಎ1, 12:1ಎ, 13:1, 4ಎ, 21, 23, 39, 41, 16:1, 2, 3, 4, 17:4ಬಿ2 ಮತ್ತು 76 ಹಾಗೂ ಬಡಗಬೆಟ್ಟು ಗ್ರಾಮದ ಸ.ನಂ. 50:15ಬಿ2 ರಲ್ಲಿಯ ಒಟ್ಟು ವಿಸ್ತೀರ್ಣ 34.56 ಎಕರೆ ಜಮೀನಿನಲ್ಲಿ ಅಂದಾಜು 6.55 ಕೋಟಿ ರೂಪಾಯಿಗಳ ವೆಚ್ಚದಲ್ಲಿ ವಸತಿ ಬಡಾವಣೆ ನಿರ್ಮಿಸಲು ಉದ್ದೇಶಿಸಿದ್ದು ಈ ವಸತಿ ಯೋಜನೆಗೆ ಸರ್ಕಾರದ ಪತ್ರ ದಿನಾಂಕ: 7.8.03 ರಲ್ಲಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 15(1)(ಬಿ) ರನ್ವಯ ಸರ್ಕಾರದಿಂದ ಪೂರ್ವಾನುಮತಿಯನ್ನು ನೀಡಲಾಗಿದೆ. ವಸತಿ ಯೋಜನೆಗೆ ಸಂಬಂಧಿಸಿದಂತೆ ಪ್ರಾಧಿಕಾರವು ಭೂ ಸ್ವಾಧೀನ ಕುರಿತು ದಿನಾಂಕ: 31.8.2003 ರಂದು ದಿನಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸಿದ್ದು ಈ ಪ್ರಕಟಣೆ ಬಗ್ಗೆ ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆ ಬಾರದೇ ಇರುವುದರಿಂದ ಪ್ರಾಧಿಕಾರದ ಸಭೆಯ ದಿನಾಂಕ: 7.10.03 ರಂದು ಪ್ರಸ್ತಾಪಿಸಿರುವಂತೆ ವಸತಿ ಯೋಜನೆ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತದೆ.

ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ಪತ್ರ ದಿನಾಂಕ: 21.10.03 ರಲ್ಲಿ ನಗರ ಯೋಜನಾ ನಿರ್ದೇಶಕರು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 18(3) ರನ್ವಯ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಗಣಿಸಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 114 ಮೈಅಪ್ರಾ 2002, ಬೆಂಗಳೂರು, ದಿನಾಂಕ: 19ನೇ ಜನವರಿ 2004**

ಉಡುಪಿ ತಾಲ್ಲೂಕು ಕೊರ್ರಂಗ್ರಪಾಡಿ ಗ್ರಾಮದ ಸ.ನಂ. 10:6ಎ1, 12:1ಎ, 13:1, 4ಎ, 21, 23, 39, 41, 16:1, 2, 3, 4 17:4ಬಿ2 ಮತ್ತು 76 ಹಾಗೂ ಬಡಗಬೆಟ್ಟು ಗ್ರಾಮದ ಸ.ನಂ. 50:15:ಬಿ2 ರಲ್ಲಿಯ ಒಟ್ಟು ವಿಸ್ತೀರ್ಣ 34.56 ಎಕರೆ ಜಮೀನಿನಲ್ಲಿ ವಸತಿ ಬಡಾವಣೆ ಯೋಜನೆಯನ್ನು ರೂ. 6.55 ಕೋಟಿಗಳ ಅಂದಾಜು ಮೊತ್ತದಲ್ಲಿ ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರವು ಕೈಗೆತ್ತಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 18(3) ರನ್ವಯ ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಲಾಗಿದೆ.

1. ಸದರಿ ಯೋಜನೆಯನ್ನು 2 ವರ್ಷಗಳ ಅವಧಿಯೊಳಗೆ ಕಾರ್ಯಗತಗೊಳಿಸತಕ್ಕದ್ದು.
2. ಸರ್ಕಾರದ ಯಾವುದೇ ಆರ್ಥಿಕ ಸಹಾಯ : ಖಾತರಿಯನ್ನು ನಿರೀಕ್ಷಿಸದೇ ಯೋಜನೆಯ ಪೂರ್ಣ ವೆಚ್ಚವನ್ನು ಪ್ರಾಧಿಕಾರವೇ ಭರಿಸತಕ್ಕದ್ದು.
3. 12 ಮೀ. ಗಿಂತ ಹೆಚ್ಚಿನ ಅಗಲದ ರಸ್ತೆಗಳಿಗೆ ಪಾದಚಾರಿ ಮಾರ್ಗ (Foot Path) ವನ್ನು ಕಡ್ಡಾಯವಾಗಿ ನಿರ್ಮಿಸತಕ್ಕದ್ದು.
4. ಸದರಿ ವಿನ್ಯಾಸದ ಒಳಚರಂಡಿ ನೀರನ್ನು ಪ್ರಮಾಣೀಕರಿಸಿದ ಮಟ್ಟದಲ್ಲಿ ಶುದ್ಧೀಕರಣವನ್ನು ಮಾಡತಕ್ಕದ್ದು.

5. ಈ ಯೋಜನೆಯಲ್ಲಿ ಒಳಗೊಂಡಿರುವ ಕಾಮಗಾರಿಗಳಾದ ಬಡಾವಣೆ ನಿರ್ಮಾಣ, ಒಳಚರಂಡಿ ನೀರು ಸರಬರಾಜು ವ್ಯವಸ್ಥೆ, ವಿದ್ಯುದೀಕರಣ ಮತ್ತಿತರ ಎಲ್ಲಾ ಕಾಮಗಾರಿಗಳನ್ನು ಕೈಗೊಳ್ಳುವ ಸಂದರ್ಭದಲ್ಲಿ ಕರ್ನಾಟಕ ಪಾರದರ್ಶಕ ಕಾಯ್ದೆ 2000 ರಲ್ಲಿಯ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ.ಆರ್. 41 ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದ ಅಧಿಕೃತ ಶೇರು ಬಂಡವಾಳವನ್ನು ರೂ. 100.00 ಕೋಟಿಯಿಂದ ರೂ. 150.00 ಕೋಟಿಗಳಿಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಬೆಂಗಳೂರು, ಇವರ ಪತ್ರ ಸಂಖ್ಯೆ: ಕೆ.ಎಸ್.ಸಿ.ಟಿ.ಡಿ.ಸಿ/ಎ.ಎಸ್.ಸಿ/2003-04/6584, ದಿನಾಂಕ: 9.7.2003.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ, ಇವರು ಪ್ರಾರಂಭದಲ್ಲಿ ನಿಗಮದ ಅಧಿಕೃತ ಶೇರು ಬಂಡವಾಳ ರೂ. 100.00 ಕೋಟಿ ನಿಗದಿಪಡಿಸಲಾಗಿದ್ದು, ಇದರಲ್ಲಿ ಶೇ. 51 ಭಾಗ ರಾಜ್ಯದ ಪಾಲು ಮತ್ತು ಶೇ. 49 ಭಾಗ ಕೇಂದ್ರದ ಪಾಲು ಸೇರಿರುತ್ತದೆ. ಸದರಿ ನಿಗಮವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಸಾಮಾಜಿಕ ಹಾಗೂ ಆರ್ಥಿಕ ಅಭಿವೃದ್ಧಿಗಾಗಿ ಪ್ರಾರಂಭಿಸಲಾಗಿದ್ದು, ಈ ಗುರಿಯ ಸಾಧನೆಗಾಗಿ ಸರ್ಕಾರವು ಕಾಲಕಾಲಕ್ಕೆ ಹಣಕಾಸು ಒದಗಿಸುತ್ತಿದ್ದು ಆಗಿಂದಾಗ್ಗೆ ಅಧಿಕೃತ ಶೇರು ಬಂಡವಾಳವನ್ನು ಹೆಚ್ಚಿಸಲಾಯಿತು. ನಿಗಮವು ತನ್ನ ಆರ್ಥಿಕ ಕಾರ್ಯಕ್ರಮಗಳನ್ನು ಇತರೆ ವಾಣಿಜ್ಯ ಸಂಸ್ಥೆಗಳ ಲೇವಾದೇವಿಗಿಂತ ವಿಭಿನ್ನ ರೀತಿಯಲ್ಲಿ ಅನುಷ್ಠಾನಗೊಳಿಸುತ್ತಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಸ್ಥಿತಿಗತಿಗಳನ್ನು ಮನಗಂಡು ಅಂಚಿನ ಹಣವನ್ನು ವಾರ್ಷಿಕ 4ರ ಬಡ್ಡಿ ದರದಲ್ಲಿ ಮತ್ತು ಅವಧಿ ಸಾಲವನ್ನು ವಾರ್ಷಿಕ ಶೇ. 6 ರಿಂದ 8ರ ದರದಲ್ಲಿ ನೀಡಲಾಗುತ್ತಿದೆ. ಈ ಅತ್ಯಂತ ಕಡಿಮೆ ಬಡ್ಡಿ ದರಗಳು ನಿಗಮದ ಕಾರ್ಯನಿರ್ವಹಣೆಯ ಖರ್ಚಿಗೂ ಸಾಲುತ್ತಿಲ್ಲ. ಹೀಗಿರುವಾಗ ಫಲಾನುಭವಿಗಳಿಗೆ ಒದಗಿಸಿದ ಸಾಲವನ್ನೇ ವಸೂಲು ಮಾಡಿ ಮತ್ತೆ, ಹೊಸದಾಗಿ ಆರ್ಥಿಕ ಸೌಲಭ್ಯ ಕಲ್ಪಿಸಲು ಬಂಡವಾಳ ಮಾಡಿಕೊಳ್ಳಲು ಸಾಧ್ಯವಿಲ್ಲ. ಈ ಹಿನ್ನಲೆಯಲ್ಲಿ ನಿಗದಿಪಡಿಸಿದ ಗುರಿ ಸಾಧಿಸಲು ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದ ಅಧಿಕೃತ ಶೇರು ಬಂಡವಾಳವನ್ನು ರೂ. 100.00 ಕೋಟಿಯಿಂದ ರೂ. 150.00 ಕೋಟಿಗಳಿಗೆ ಹೆಚ್ಚಿಸುವ ಬಗ್ಗೆ ಕೋರಿರುತ್ತಾರೆ. ಅಲ್ಲದೆ ಪಾವತಿಸಿದ ಶೇರು ಬಂಡವಾಳವು ಈಗಾಗಲೇ ರೂ. 107,65,64,000/- ಮುಟ್ಟಿರುವುದರಿಂದ ಅಧಿಕೃತ ಶೇರು ಬಂಡವಾಳದ ಈಗಿರುವ ರೂ. 100.00 ಕೋಟಿ ಮಿತಿ ಹೆಚ್ಚಿಸದ ಹೊರತು ಕೇಂದ್ರ ಸರ್ಕಾರವು ಮುಂದೆ ಹಣ ತೊಡಗಿಸುವುದಿಲ್ಲವೆಂದು ಕೂಡಾ ತಿಳಿಸಿರುತ್ತಾರೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 124 ಎಸ್‌ಡಿಸಿ 2003, ಬೆಂಗಳೂರು, ದಿನಾಂಕ: 16ನೇ ಜನವರಿ 2004**

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದ ಅಭಿವೃದ್ಧಿ ನಿಗಮವನ್ನು 1956ನೇ ಕಂಪನಿ ಕಾಯಿದೆಯಡಿ 1975ನೇ ಮಾರ್ಚ್ 25 ರಂದು ಪ್ರಾರಂಭಿಸಲಾಗಿದ್ದು, ನಿಗಮದ ಆರ್ಥಿಕ ಮಟ್ಟವನ್ನು ಅಭಿವೃದ್ಧಿಪಡಿಸಿಕೊಳ್ಳಲು ಅನುಕೂಲವಾಗುವಂತಹ ಆರ್ಥಿಕ ಚಟುವಟಿಕೆಗಳನ್ನು ಕೈಗೊಳ್ಳಲು ಸಾಲ ಸೌಲಭ್ಯ ಒದಗಿಸುವ ಹಿನ್ನಲೆಯಲ್ಲಿ ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದ ಅಧಿಕೃತ ಶೇರು ಬಂಡವಾಳವನ್ನು ರೂ. 100.00 ಕೋಟಿಯಿಂದ ರೂ. 150.00 ಕೋಟಿಗಳಿಗೆ ಹೆಚ್ಚಿಸಲು ಸರ್ಕಾರವು ಸಹಮತಿಸಿದೆ.

ಸದರಿ ಆದೇಶವು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1568/ವೆಚ್ಚ-3/03, ದಿನಾಂಕ: 8.10.2003 ರಲ್ಲಿ ಹಾಗೂ ಸಚಿವ ಸಂಪುಟದ ವಿಷಯ ಸಂಖ್ಯೆ: ಸಿ.403/2003, ದಿನಾಂಕ: 26.12.2003 ರಲ್ಲಿ ಅನುಮೋದಿಸಲ್ಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್. 42 ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ಎ. ಲೋಹರ್, ಜಿಲ್ಲಾ ನ್ಯಾಯಾಧೀಶರು (ಅಡ್‌ಹಾಕ್) ಇವರನ್ನು 60 ವರ್ಷ ವಯಸ್ಸು ಪೂರೈಸುವವರೆಗೆ ಸೇವೆಯಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿಓಬಿ (1) 225 : 2001, ದಿನಾಂಕ: 4.12.2003.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರ ಸೇವೆಯನ್ನು 58 ವರ್ಷ ವಯಸ್ಸಿನ ನಂತರವೂ ಮುಂದುವರೆಸುವ ಬಗ್ಗೆ ಉಚ್ಚ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯ ಮಾಪನ ಮಾಡಿ 58 ವರ್ಷ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದಲ್ಲಿ, ಕರ್ನಾಟಕ

ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 58 ವರ್ಷಗಳ ವಯಸ್ಸಿನ ನಂತರದಲ್ಲಿ 60 ವರ್ಷಗಳವರೆಗೆ ಮುಂದುವರೆಸಬಹುದು.

ಅದರಂತೆ ಪರಾಮರ್ಶಿಸಿ ಮೇಲೆ ಓದಲಾದ ಪತ್ರದಲ್ಲಿ ಸ್ಕ್ರೀನಿಂಗ್ ಸಮಿತಿ ಮತ್ತು ಪೂರ್ಣ ಪೀಠವು ದಿನಾಂಕ: 31.12.2003 ಕ್ಕೆ 58 ವರ್ಷ ವಯಸ್ಸನ್ನು ಪೂರೈಸುವ ಶ್ರೀ ಎಂ.ಎ. ಲೋಹರ್, ಜಿಲ್ಲಾ ನ್ಯಾಯಾಧೀಶರು (ಅಡ್‌ಹಾಕ್), ಪ್ರಿಸೈಡಿಂಗ್ ಆಫೀಸರ್, ಫಾಸ್ಟ್ ಟ್ರ್ಯಾಕ್ ಕೋರ್ಟ್, ಗೋಕಾಕ್ ಇವರು 60 ವರ್ಷ ವಯಸ್ಸಾಗುವವರೆಗೆ ಸೇವೆಯಲ್ಲಿ ಮುಂದುವರಿಯಲು ಅರ್ಹರಿರುವರೆಂದು ತೀರ್ಮಾನಿಸಲಾಗಿದೆಯೆಂದು ತಿಳಿಸಿ ಇವರ ಸೇವೆಯನ್ನು 58 ವರ್ಷಗಳ ನಂತರ 60 ವರ್ಷ ವಯಸ್ಸಿನವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 115 ಸೇಉನ್ಯಾ 2003, ಬೆಂಗಳೂರು, ದಿನಾಂಕ: 16ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ದಿನಾಂಕ: 31.12.2003 ಕ್ಕೆ 58 ವರ್ಷ ಪೂರೈಸಿದ ಶ್ರೀ ಎಂ.ಎ. ಲೋಹರ್, ಜಿಲ್ಲಾ ನ್ಯಾಯಾಧೀಶರು (ಅಡ್‌ಹಾಕ್), ಪ್ರಿಸೈಡಿಂಗ್ ಆಫೀಸರ್, ಫಾಸ್ಟ್ ಟ್ರ್ಯಾಕ್ ಕೋರ್ಟ್, ಗೋಕಾಕ್ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 60 ವರ್ಷಗಳ ತನಕ ಸೇವೆಯಲ್ಲಿ ಮುಂದುವರೆಸಲು ಸರ್ಕಾರ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 46

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ತ್ರಿನೇತ್ರ ಎನರ್ಜಿ ಕನ್ವರ್ಷನ್ಸ್ ಲಿಮಿಟೆಡ್, ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಚಾರ್ಮಾಡಿ ಕಿರು ಜಲ ವಿದ್ಯುತ್ ಯೋಜನಾನುಷ್ಠಾನಕ್ಕೆ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 125 ಎನ್‌ಸಿಇ 96 (10), ದಿನಾಂಕ: 10.6.1997
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 50 ಎನ್‌ಸಿಇ 2001, ದಿನಾಂಕ: 22.5.2001.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ: ಚಾರ್ಮಾಡಿ: 2002: 1738, ದಿನಾಂಕ: 7.11.2003.

**ಪ್ರಸ್ತಾವನೆ:**

ಮೆಸರ್ಸ್ ತ್ರಿನೇತ್ರ ಎನರ್ಜಿ ಕನ್ವರ್ಷನ್ಸ್ ಲಿಮಿಟೆಡ್, ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಮುಂಡಾಜೆ ಎಂಬಲ್ಲಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಚಾರ್ಮಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾಗಿತ್ತು.

2. ಸದರಿ ಕಂಪನಿಗೆ ಹಂಚಿಕೆ ಆಗಿರುವ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 30 ತಿಂಗಳುಗಳಿಗೆ ವಿಸ್ತರಿಸಲಾಗಿತ್ತು. ವಿಸ್ತರಿಸಲಾಗಿರುವ ಅವಧಿಯು ದಿನಾಂಕ: 21.11.2003ಕ್ಕೆ ಕೊನೆಗೊಂಡಿದೆ.

3. ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಇನ್ನೂ 36 ತಿಂಗಳು ವಿಸ್ತರಿಸಬೇಕೆಂದು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 280 ಎನ್‌ಸಿಇ 2003, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2003**

4. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಮೆಸರ್ಸ್ ತ್ರಿನೇತ್ರ ಎನರ್ಜಿ ಕನ್ವರ್ಷನ್ಸ್ ಲಿಮಿಟೆಡ್, ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಮುಂಡಾಜೆ ಎಂಬಲ್ಲಿ ಹಂಚಿಕೆ ಆಗಿರುವ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಚಾರ್ಮಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮೇಲೆ (1)ರಲ್ಲಿ ಓದಲಾದ ಆದೇಶದ ನಿಬಂಧನೆಗೊಳಪಟ್ಟು ದಿನಾಂಕ 21.11.2003 ರಿಂದ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 20.11.2004 ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಲ್. ಜಯರಾಂ**

ಪಿ.ಆರ್. 52

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## FINANCE SECRETARIAT

**Subject :** Austerity Measures for 2003-2004

**Read :**
1. Government Order No. FD 3 BEM 2001, dated: 17.10.2001.
2. Government Order No. FD 2 BEM 2003, dated: 29.9.2003.

**Preamble:**

In Government Order No. FD 2 BEM 2003, dated: 29th September 2003, certain austerity measures were prescribed to effect economy in expenditure. Now it has been considered necessary to exempt Bangalore Development Authority, expenditure on Treasury Computerization and Administrative expenditure under Centrally Sponsored Schemes/ Central Plan Schemes from the purview of economy orders as a special case, Hence the Order.

**Government Order No. FD 02 BEM 2003, Bangalore, dated: 10th December 2003**

Government is pleased to exempt Bangalore Development Authority, expenditure incurred under Modernization for Treasury Computerization and Administrative expenditure under Centrally Sponsored Schemes/ Central Plan Schemes from the austerity measures prescribed in Government Order No. FD 2 BEM 2003, dated: 29.9.2003.

By Order and in the name of the Governor of Karnataka,

**T. P. NARASINGA RAO**

PR-53

Under Secretary to Government

Finance Department (F.R. & C.C.).

**ಕಂದಾಯ ಸಚಿವಾಲಯ**

**ವಿಷಯ:** ನೋಂದಣಿ ಹಾಗೂ ಮುದ್ರಾಂಕ ಇಲಾಖೆಯಲ್ಲಿ 2 ಡಿ.ಐ.ಜಿ. ಹುದ್ದೆಗಳ ಅಧಿಕಾರಿಗಳಿಗೆ ಪೂರಕ ಸಿಬ್ಬಂದಿ ನೀಡುವ ಕುರಿತು.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರವರ ಟಿಪ್ಪಣಿ ಸಂಖ್ಯೆ: ಸಿಬ್ಬಂದಿ-1: 327:02-03, ದಿನಾಂಕ: 17.3.2003.

2) ಸರ್ಕಾರಿ ಆದೇಶ ಸಂಖ್ಯೆ:ಕಂಇ 94 ಮುನೋಸೇ 97, ದಿನಾಂಕ: 20.1.1998

3) ಸರ್ಕಾರಿ ಆದೇಶ ಸಂಖ್ಯೆ:ಕಂಇ 94 ಮುನೋಸೇ 97, ದಿನಾಂಕ: 10.9.97.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ, ದಿನಾಂಕ: 20.1.1998ರ ಸರ್ಕಾರಿ ಆದೇಶದಲ್ಲಿ ಇಲಾಖೆಯಲ್ಲಿ 2 ಉಪ ನೋಂದಣಿ ಮಹಾಪರಿವೀಕ್ಷಕರ ಹುದ್ದೆಗಳನ್ನು ಸೃಜಿಸಲಾಗಿದ್ದು, ಸದರಿ ಹುದ್ದೆಗಳ ಅಧಿಕಾರಿಗಳಿಗೆ ಇಲ್ಲಿಯವರೆಗೂ ಪೂರಕ ಸಿಬ್ಬಂದಿ ನೀಡಿಲ್ಲ, ಆದ್ದರಿಂದ ಸರ್ಕಾರದ ದಿನಾಂಕ: 10.9.97ರ ಆದೇಶದಲ್ಲಿ ಸೃಜಿಸಲಾಗಿರುವ ಹುದ್ದೆಗಳ ಪೈಕಿ 2 ಪ್ರಥಮ ದರ್ಜೆ ಸಹಾಯಕರು, 2 ಶೀಘ್ರಲಿಪಿಗಾರರು ಹಾಗೂ 2 ಗ್ರೂಪ್-ಡಿ ನೌಕರರ ಹುದ್ದೆಗಳನ್ನು ಖಾಯಂ ಆಗಿ ಸೃಜನೆ ಮಾಡಿ ಭರ್ತಿ ಮಾಡಿಕೊಳ್ಳಲು ಅನುಮೋದನೆ ಕೋರಿದ್ದಾರೆ.

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 21 ಮುನೋಸೇ (2) 2003 ಬೆಂಗಳೂರು, ದಿನಾಂಕ: 1ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಕಂಇ 94 ಮುನೋಸೆ 97, ದಿನಾಂಕ: 10.9.97ರಲ್ಲಿ ಸೃಜಿಸಲಾದ ಹುದ್ದೆಗಳಲ್ಲಿ 2 ಪ್ರಥಮ ದರ್ಜೆ ಸಹಾಯಕರು, 2 ಶೀಘ್ರಲಿಪಿಗಾರರು ಹಾಗೂ 2 ಗ್ರೂಪ್ ಡಿ ಹುದ್ದೆಗಳನ್ನು ನೋಂದಣಿ ಹಾಗೂ ಮುದ್ರಾಂಕ ಇಲಾಖೆಯ ಉಪ ನೋಂದಣಿ ಮಹಾಪರಿವೀಕ್ಷಕರ ಹುದ್ದೆಯ ಅಧಿಕಾರಿಗಳಿಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನಾಗಿ ಸ್ಥಳಾಂತರಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿ. ನಾರಾಯಣ**

ಪಿ.ಆರ್. 54

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಚಾಮರಾಜನಗರ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಯ ಶೀಘ್ರಲಿಪಿಗಾರರ ಹುದ್ದೆ ಸ್ಥಳಾಂತರ ಕುರಿತು.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಸಿಬ್ಬಂದಿ 1-37: 99-2000, ದಿನಾಂಕ: 11.7.2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ ಮೈಸೂರು ಜಿಲ್ಲಾ ನೋಂದಣಾಧಿಕಾರಿ ಕಛೇರಿಯಲ್ಲಿ ಕೆಲಸದ ಒತ್ತಡ ಹೆಚ್ಚಿರುವುದರಿಂದ ಚಾಮರಾಜನಗರ ಜಿಲ್ಲಾ ನೋಂದಣಿ ಕಛೇರಿಯಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಯನ್ನು ಮೈಸೂರು ಜಿಲ್ಲಾ ನೋಂದಣಿ ಕಛೇರಿಗೆ ಹಾಗೂ ಮೈಸೂರು ಜಿಲ್ಲಾ ನೋಂದಣಿ ಕಛೇರಿಯಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಹುದ್ದೆಯನ್ನು ಚಾಮರಾಜನಗರ ಜಿಲ್ಲಾ ನೋಂದಣಿ ಕಛೇರಿಗೆ ಸ್ಥಳಾಂತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 41 ಮುನೋಸೇ (3) 2003, ಬೆಂಗಳೂರು, ದಿನಾಂಕ: 9ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಾಮರಾಜನಗರ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಯಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಯನ್ನು ಜಿಲ್ಲಾ ನೋಂದಣಿ ಕಛೇರಿ ಮೈಸೂರು ಇಲ್ಲಿಗೆ ಹಾಗೂ ಜಿಲ್ಲಾ ನೋಂದಣಿ ಕಛೇರಿ, ಮೈಸೂರು ಇಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಹುದ್ದೆಯನ್ನು ಜಿಲ್ಲಾ ನೋಂದಣಿ ಕಛೇರಿ, ಚಾಮರಾಜನಗರ ಇಲ್ಲಿಗೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿ. ನಾರಾಯಣ**

ಪಿ.ಆರ್. 55 ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀ ಸಿದ್ದಿವಿನಾಯಕ ಸಾಂಸ್ಕೃತಿಕ ಸಂಘ (ರಿ), ವಿನೋಬನಗರ, ದಾವಣಗೆರೆ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** 1) ಜಿಲ್ಲಾ ನೋಂದಣಾಧಿಕಾರಿ, ದಾವಣಗೆರೆ ಅವರ ವರದಿ ಸಂಖ್ಯೆ: ಜಿ.ನೋ.ದಾ. ಸಂಘ 17:77-78, ದಿನಾಂಕ: 18.11.2003.

2) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 45 ಮುನೋಸೊ 2003, ದಿನಾಂಕ: 2.12.2003.

3) ಅಧ್ಯಕ್ಷರು: ಕಾರ್ಯದರ್ಶಿಗಳು, ಶ್ರೀ ಸಿದ್ದಿವಿನಾಯಕ ಸಾಂಸ್ಕೃತಿಕ ಸಂಘ ಇವರ ಲಿಖಿತ ಹೇಳಿಕೆ ದಿನಾಂಕ:

4) ಕಾರ್ಯದರ್ಶಿ, ಶ್ರೀ ಸಿದ್ದಿವಿನಾಯಕ ಸಾಂಸ್ಕೃತಿಕ ಸಂಘ ಇವರ ಹೇಳಿಕೆ ದಿನಾಂಕ: 11.12.2003

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿ, ದಾವಣಗೆರೆ ಅವರು ವರದಿ ನೀಡುತ್ತಾ ಶ್ರೀ ಸಿದ್ದಿವಿನಾಯಕ ಸಾಂಸ್ಕೃತಿಕ ಸಂಘ, ದಾವಣಗೆರೆ, ಈ ಸಂಸ್ಥೆಯು 1977ರಲ್ಲಿ ನೋಂದಣಿಯಾಗಿದ್ದು, 1995ರವರೆಗೆ ಸಂಘದ ಲೆಕ್ಕಪತ್ರ ಒಪ್ಪಿಸಿದೆ. 1995 ರಿಂದ ಸಂಸ್ಥೆಯಲ್ಲಿ ಎರಡು ಬಣಗಳುಂಟಾಗಿ 2 ಬಣಗಳು ವಾರ್ಷಿಕ ದಾಖಲೆಗಳನ್ನು ಸಲ್ಲಿಸಿ ಸ್ವೀಕೃತಿ ಕೋರಿದ್ದಾರೆ 2 ಬಣಗಳ ವಿವಾದದಲ್ಲಿ ಸಂಸ್ಥೆ ನಡೆಸುತ್ತಿರುವ ಶಾಲೆ ಕಾಲೇಜುಗಳ ಆಡಳಿತ ಕಷ್ಟಕರವಾಗಿರುತ್ತದೆ. ಈ ಕಾರಣದಿಂದ ಶಾಲಾ ಶಿಕ್ಷಕರ ವೇತನ ಅನುದಾನ 7:2003 ರಿಂದ ಸ್ಥಗಿತಗೊಂಡಿದೆ. ಇದರಿಂದ ಶೈಕ್ಷಣಿಕ ಪ್ರಗತಿಗೆ ಹಿನ್ನಡೆಯಾಗಿದೆ. ಆದ್ದರಿಂದ ನೈಜ ಆಡಳಿತ ಮಂಡಳಿ ಯಾವುದೆಂದು ತೀರ್ಮಾನ ಆಗುವವರೆಗೆ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಮಾಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯನ್ನಾಧರಿಸಿ ಸಂಸ್ಥೆಗೆ ಓದಲಾದ (2)ರ ಪ್ರಕಾರ ಜಿಲ್ಲಾ ನೋಂದಣಾಧಿಕಾರಿಗಳ ವರದಿಯನ್ನು ಒಪ್ಪಿ ಏಕೆ ಆಡಳಿತಾಧಿಕಾರಿ ನೇಮಕ ಮಾಡಬಾರದೆಂಬ ಬಗ್ಗೆ ನೋಟೀಸ್ ಜಾರಿ ಮಾಡಲಾಯಿತು. ಓದಲಾದ (3) ಮತ್ತು (4)ರಲ್ಲಿ ಸಂಸ್ಥೆ ಕುರಿತು ಹೇಳಿಕೆ ನೀಡಿ ಜಿಲ್ಲಾ ನೋಂದಣಾಧಿಕಾರಿಗಳು ತಪ್ಪುಗ್ರಾಹಿಕೆಯಿಂದ ಏಕಪಕ್ಷೀಯವಾಗಿ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಆದ್ದರಿಂದ ಆಡಳಿತಾಧಿಕಾರಿ ನೇಮಕ ಕೈ ಬಿಡಬೇಕೆಂದು ಎರಡು ಬಣಗಳ ಕಾರ್ಯದರ್ಶಿಗಳು ಸಲ್ಲಿಸಿದ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಸಂಸ್ಥೆ ಸಲ್ಲಿಸಿದ ಲಿಖಿತ ಹೇಳಿಕೆಯನ್ನು ಒಪ್ಪದೆ ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 45 ಮುನೋಸೊ 2003, ಬೆಂಗಳೂರು ದಿನಾಂಕ: 12ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಸಿದ್ದಿವಿನಾಯಕ ಸಾಂಸ್ಕೃತಿಕ ಕೇಂದ್ರ (ರಿ), ವಿನೋಬನಗರ, ದಾವಣಗೆರೆ, ದಾವಣಗೆರೆ ತಾಲ್ಲೂಕು, ದಾವಣಗೆರೆ ಜಿಲ್ಲೆ ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿಗಳು (ಕಂದಾಯ ಇಲಾಖೆ) ದಾವಣಗೆರೆ ಉಪ ವಿಭಾಗ ಇವರನ್ನು ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ಅಥವಾ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಯಲ್ಲಿಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಆಡಳಿತ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿ. ನಾರಾಯಣ**

ಪಿ.ಆರ್. 56 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀ ಎಸ್. ವೈ. ಜಾವಡಗಿ, ಉಪ ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು), ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಕಛೇರಿ ಅವರ ಅಮಾನತ್ತು ಕುರಿತು.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ವರದಿ ಸಂಖ್ಯೆ: ಇವಿ 1-18/2003-04 ದಿನಾಂಕ: 30.12.2003.

**ಪ್ರಸ್ತಾವನೆ:**

ಓದಲಾದ ದಿನಾಂಕ: 30.12.2003 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ವರದಿ ಸಲ್ಲಿಸಿ ಶ್ರೀ ಎಸ್. ವೈ. ಜಾವಡಗಿ, ಉಪ ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು), ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪ್ರಕರಣ ಸಂಖ್ಯೆ: ಡಿಐಜಿ (ಆರ್) 45-ಎ (5) 171/01-02 ಮತ್ತು ಇನ್ನು 2 ಪ್ರಕರಣಗಳ ಇತ್ಯರ್ಥಕ್ಕೆ

ಸಂಬಂಧಿಸಿದಂತೆ, ಸದರಿ ಮನವಿದಾರರಾದ ಶ್ರೀಮತಿ ನೀಲಮ್ಮ ಕೋಂ ಎನ್. ಸಿ. ರಾಜಪ್ಪ, ಕಸಬಾ ಹೋಬಳಿ, ಸುಭಾಷ್ ನಗರ, ನೆಲಮಂಗಲ ಅವರಿಂದ ಅಕ್ರಮ ಸಂಭಾವನೆಯಾಗಿ ರೂ. 1,00,000-00 (ಒಂದು ಲಕ್ಷ ರೂಪಾಯಿ) ಗಳನ್ನು ದಿನಾಂಕ: 30.12.2003 ರಂದು ಪಡೆಯುತ್ತಿದ್ದಾಗ ಲೋಕಾಯುಕ್ತ ಬಲೆಗೆ ಸಿಕ್ಕಿ ಬಿದ್ದಿರುತ್ತಾರೆ. ಈ ಅಧಿಕಾರಿಯನ್ನು ಸೇವೆಯಲ್ಲಿ ಮುಂದುವರೆಸಿದರೆ ಸರ್ಕಾರಕ್ಕೆ ಸಂಬಂಧಿಸಿದ ದಾಖಲೆಗಳನ್ನು ಟ್ಯಾಂಪರ್ ಮಾಡುವ ಸಾಧ್ಯತೆ ಇರುವುದರಿಂದ ತಕ್ಷಣ ಅಮಾನತ್ತುಗೊಳಿಸಲಾಗಿದೆ ಎಂದು ಹೇಳಿದ್ದಾರೆ.

ನೋಂದಣಿ ಮಹಾಪರಿವೀಕ್ಷಕರ ಹಾಗೂ ಮುದ್ರಾಂಕಗಳ ಆಯುಕ್ತರವರ ವರದಿಯನ್ನು ಪರಿಶೀಲಿಸಿ ಸರ್ಕಾರವು ಶ್ರೀ ಎಸ್. ವೈ. ಜಾವಡಗಿ, ಉಪ ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು) ಇವರನ್ನು ಸೇವೆಯಿಂದ ಅಮನತ್ತುಗೊಳಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 1 ಮುನೋಸೇ (1) 2004, ಬೆಂಗಳೂರು ದಿನಾಂಕ: 7ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(1) ರ ಮೇರೆಗೆ ಶ್ರೀ ಎಸ್. ವೈ. ಜಾವಡಗಿ, ಉಪ ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು), ನೋಂದಣಿ ಮಹಾಪರಿವೀಕ್ಷಕರ ಹಾಗೂ ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕೂಡಲೇ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತು ಅವಧಿಯಲ್ಲಿ ಸದರಿ ಅಧಿಕಾರಿಯು ನಿಯಮಾನುಸಾರ ಜೀವನಾಧಾರ ಭತ್ಯೆಗೆ ಅರ್ಹರಿರುತ್ತಾರೆ ಹಾಗೂ ಇಲಾಖಾ ಮುಖ್ಯಸ್ಥರು/ ಸರ್ಕಾರದ ಅನುಮತಿ ಇಲ್ಲದೆ ಕೇಂದ್ರ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿ. ನಾರಾಯಣ**
ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 57

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 286 ಡಿಪಿಐ 2003 ಬೆಂಗಳೂರು, ದಿನಾಂಕ: 9ನೇ ಜನವರಿ 2004**

ದಿನಾಂಕ: 1.1.2003 ರಲ್ಲಿರುವಂತೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾಪಟ್ಟಿಯನ್ನು ಅನುಬಂಧದಲ್ಲಿ ಈ ಮೂಲಕ ಪ್ರಕಟಿಸಲಾಗಿದೆ. ಈ ತಾತ್ಕಾಲಿಕ ಪಟ್ಟಿಯಿಂದ ಬಾಧಿತರಾದ ಅಧಿಕಾರಿಗಳು ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ ತಮ್ಮ ಆಕ್ಷೇಪಣೆಗಳನ್ನು ಸಂಬಂಧಿಸಿದ ದಾಖಲೆಗಳೊಡನೆ ನೇರವಾಗಿ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಯವರಿಗೆ ಸಲ್ಲಿಸತಕ್ಕದ್ದು. ನಿಗದಿತ ಗಡುವು ಮುಗಿದ ನಂತರ ಬಂದಂತಹ ಆಕ್ಷೇಪಣೆ ಸಲಹೆಗಳನ್ನು ಪರಿಶೀಲಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್. ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು 1,2).

### ಅನುಬಂಧ

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿ:**
**(1.1.2003 ರಲ್ಲಿ ಕಾರ್ಯ ನಿರ್ವಹಿಸುತ್ತಿರುವವರು)**

| ಕ್ರ. ಸಂ. | ಜೇಷ್ಠತಾ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಉಪನಿರ್ದೇಶಕರಾಗಿ ಬಡ್ತಿ ಹೊಂದಿದ ದಿನಾಂಕ | ಜಾತಿ ಎಸ್.ಸಿ/ ಎಸ್.ಟಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | 221 | ಪಿ. ಎ. ರಾಮಕೃಷ್ಣ | 15.10.45 | 07.07.73 | 19.01.84 | ಎಸ್.ಸಿ. |
| 2. | 256 | ಉದ್ದಿ ಪ್ರಭು | 11.11.46 | 12.07.73 | 07.01.93 | - |
| 3. | 257 | ಜಿ. ಚಂದ್ರಶೇಖರ್ | 29.08.49 | 12.07.73 | 07.01.93 | - |
| 4. | 266 | ರೇಜಿಸ್ ಫಿಲೋಮಿನಾ ರಾಜ್ | 11.08.49 | 07.07.73 | 11.11.93 | - |
| 5. | 267 | ಕೆ. ಜೋಸೆಫ್ | 14.02.47 | 19.07.73 | 18.02.94 | - |
| 6. | 268 | ಹೆಚ್.ಎಸ್. ಮಣ್ಣೂರ | 20.02.46 | 20.07.73 | 11.11.93 | - |
| 7. | 271 | ಕೆ. ಉಷಾದೇವಿ | 27.09.49 | 09.07.73 | 18.05.98 | - |
| 8. | 273 | ಪಿ. ಶಾರದಮ್ಮ | 05.06.47 | 09.07.73 | 18.05.98 | - |

| 1 | 2 | 3 | 4 | 5 | 6 | 7 |
|---|---|---|---|---|---|---|
| 9. | 274 | ಎಸ್. ಉಷಾ | 04.05.49 | 09.07.73 | 18.05.98 | - |
| 10. | 275 | ಸಿ. ವಿ. ತಿರುಮಲರಾವ್ | 16.04.47 | 09.07.73 | 18.05.98 | - |
| 11. | 277 | ಡಿ. ಎಂ. ಭಜಂತ್ರಿ | 01.06.45 | 20.07.73 | 11.11.93 | ಎಸ್.ಸಿ. |
| 12. | 278 | ಎನ್. ಶೇಷಮ್ಮ | 18.09.45 | 07.07.73 | 11.11.93 | ಎಸ್.ಸಿ. |
| 13. | 279 | ಬಿ. ಸಿ. ವಿಮಲ | 06.05.46 | 05.07.73 | 18.05.98 | ಎಸ್.ಸಿ. |
| 14. | 283 | ಎಂ. ನಟರಾಜ್ | 29.01.45 | 09.07.73 | 11.11.93 | ಎಸ್.ಸಿ. |
| 15. | 284 | ಆರ್. ನರೇಂದ್ರ | 09.07.48 | 07.07.73 | 18.05.98 | - |
| 16. | 287 | ಎ. ಎಸ್. ರಾಮಪ್ಪ | 01.07.45 | 08.07.73 | 18.05.98 | - |
| 17. | 290 | ಜನಾರ್ಧನ ಹತ್ವಾರ್ | 08.07.45 | 13.01.73 | 18.05.98 | - |
| 18. | 291 | ಕೆ. ಪ್ರಹ್ಲಾದಾಚಾರ್ | 01.06.48 | 11.07.73 | 18.05.98 | - |
| 19. | 294 | ದೊಡ್ಡಸಿದ್ದಪ್ಪ | 09.07.45 | 07.07.73 | 18.05.98 | - |
| 20. | 296 | ಎಂ. ಚಂದ್ರಶೇಖರಯ್ಯ | 11.11.48 | 10.07.73 | 18.05.98 | - |
| 21. | 297 | ಸಿ. ಎಸ್. ಹಿರೇಮಠ್ | 16.01.46 | 11.07.73 | 18.05.98 | - |
| 22. | 299 | ಎಸ್. ಜಿ. ಭಟ್ | 01.01.46 | 11.07.73 | 18.05.98 | - |
| 23. | 300 | ಗುಣಪಾಲಪಕ್ಕಳ | 25.01.45 | 20.07.73 | 18.05.98 | - |
| 24. | 305 | ಎಸ್. ಎನ್. ರಂಗೇಗೌಡ | 01.01.47 | 05.07.73 | 18.05.98 | - |
| 25. | 306 | ಹೆಚ್.ವಿ. ಶೇಷಗಿರಿರಾವ್ | 07.11.45 | 09.07.73 | 18.05.98 | - |
| 26. | 308 | ಕೆ. ರಾಜನ್ | 30.05.47 | 04.08.73 | 18.05.98 | - |
| 27. | 309 | ಪಿ. ವಿ. ಲಕ್ಷ್ಮಯ್ಯ | 10.12.46 | 11.07.73 | 18.05.98 | - |
| 28. | 311 | ಹೆಚ್. ಜಯಪ್ಪ | 18.05.46 | 06.07.73 | 18.05.98 | - |
| 29. | 312 | ಎಸ್. ಎನ್. ಮೀರಾದೇವಿ | 19.02.48 | 07.07.73 | 18.05.98 | - |
| 30. | 314 | ಆರ್. ವಿ. ಈಶ್ವರಯ್ಯ | 28.06.50 | 09.07.73 | 18.05.98 | - |
| 31. | 315 | ಜಿ. ಸೋಮಶೇಖರಯ್ಯ | 30.06.45 | 06.07.73 | 18.05.98 | - |
| 32. | 320 | ಕೆ. ಎಸ್. ಷಡಕ್ಷರಪ್ಪ | 02.05.45 | 06.07.73 | 18.05.98 | - |
| 33. | 321 | ಎಂ. ಸಿ. ನಾಯಕ | 23.06.46 | 10.07.73 | 18.05.98 | - |
| 34. | 324 | ಎಸ್. ಸೂರ್ಯನಾರಾಯಣ | 13.09.45 | 09.07.73 | 18.05.98 | - |
| 35. | 326 | ಕೆ. ಬಿ. ರಾಮಲಿಂಗಪ್ಪ | 23.04.46 | 06.07.73 | 18.05.98 | - |
| 36. | 333 | ಬಿ. ಟಿ. ಸತ್ಯನಾರಾಯಣ ರೆಡ್ಡಿ | 04.06.49 | 16.09.76 | 18.05.98 | - |
| 37. | 335 | ಮೀರ್ ಒಬೇದುಲ್ಲಾ | 25.09.51 | 06.09.76 | 18.05.98 | - |
| 38. | 338 | ಎಸ್. ಎ. ಹೊನ್ನಪ್ಪ ಗೋಳ್ | 01.06.48 | 13.10.76 | 18.05.98 | - |
| 39. | 339 | ಡಯಾನಾ ಎಫ್. ಪ್ರಭು | 09.06.49 | 10.09.76 | 17.10.98 | - |
| 40. | 344 | ಡಿ. ಎಂ. ಮಂಟೂರ | 09.04.50 | 07.10.76 | 17.10.98 | - |
| 41. | 345 | ರೆಹಮತ್ತುನ್ನೀಸಾ | 22.04.49 | 12.07.77 | 17.10.98 | - |
| 42. | 347 | ಎಸ್. ಎನ್. ಪ್ರತಿಮಾ | 17.07.51 | 29.06.77 | 17.10.98 | - |
| 43. | 348 | ಎನ್. ಹೆಚ್. ಕಟಕದೋಂಡ್ | 01.06.53 | 05.07.77 | 17.10.98 | - |
| 44. | 354 | ಆರ್. ವೈ. ಹೊಸಪೇಟೆ | 02.08.51 | 06.07.77 | 17.10.98 | - |
| 45. | 356 | ಎ. ಎ. ಪಾರ್ಸಿ | 06.06.49 | 18.12.78 | 17.10.98 | - |
| 46. | 357 | ಡಿ. ಆರ್. ರಾಜಾರಾಂ | 06.07.49 | 29.07.77 | 17.10.98 | - |
| 47. | 359 | ಎಸ್. ಎಸ್. ಕಬ್ಬೂರ | 01.05.47 | 11.07.77 | 07.12.2000 | - |
| 48. | 364 | ಅಬ್ದುಲ್ ವಾಜೀದ್ | 25.06.49 | 30.10.78 | 07.12.2000 | - |
| 49. | 366 | ಎಸ್. ದೇವಿಪ್ರಸಾದ್ | 11.07.52 | 27.12.78 | 07.12.2000 | - |
| 50. | 368 | ಎಸ್. ನಜಾಫಲ್ಲಾ ಬೇಗ್ | 05.04.53 | 29.10.78 | 13.06.2001 | - |
| 51. | 372 | ಡಿ. ಎಸ್. ರಾಜಣ್ಣ | 24.01.51 | 29.11.78 | 13.06.2001 | - |
| 52. | 375 | ಮಹ್ಮದ್ ಹಫೀಜುಲ್ಲಾ ಷರೀಫ್ | 02.02.51 | 06.01.79 | 13.06.2001 | - |

| 1 | 2 | 3 | 4 | 5 | 6 | 7 |
|---|---|---|---|---|---|---|
| 53. | 377 | ಎಂ. ಎಸ್. ಪಾಟೀಲ್ | 10.04.51 | 01.01.79 | 13.06.2001 | - |
| 54. | 378 | ಕೆ. ಎಸ್. ರಾಜಗೋಪಾಲ್ | 30.12.48 | 30.11.78 | 13.06.2001 | - |
| 55. | 380 | ಆರ್.ಟಿ. ದೇಸಾಯಿ | 22.01.51 | 01.01.79 | 13.06.2001 | - |
| 56. | 381 | ಎನ್. ಹೆಚ್. ಸತ್ಯಮೂರ್ತಿ | 11.01.52 | 01.12.78 | 13.06.2001 | - |
| 57. | 383 | ಹೆಚ್. ಎಸ್. ರಾಮರಾವ್ | 18.10.53 | 02.11.78 | 13.06.2001 | - |
| 58. | 384 | ಕೆ. ಗಂಗಪ್ಪಗೌಡ | 25.03.50 | 28.12.78 | 13.06.2001 | - |
| 59. | 386 | ಬಸಣ್ಣ | 12.06.52 | 05.12.78 | 19.08.2002 | - |
| 60. | 387 | ವಿ. ಚನ್ನವೀರಪ್ಪ | 25.06.50 | 08.12.78 | 19.08.2002 | - |
| 61. | 390 | ಬಿ. ಎನ್. ಕೃಷ್ಣಮೂರ್ತಿ | 16.07.48 | 01.01.79 | 19.08.2002 | - |
| 62. | 392 | ಎಸ್. ಎಂ. ಶಾಂತರಾಜು | 20.02.51 | 14.12.78 | 19.08.2002 | - |
| 63. | 395 | ವೈ. ಟಿ. ಗುರುಮೂರ್ತಿ | 27.04.54 | 29.11.78 | 19.08.2002 | - |
| 64. | 398 | ಎ. ರುದ್ರಪ್ಪ | 01.07.54 | 01.12.78 | 19.08.2002 | - |
| 65. | 399 | ಕೆ. ಪಿ. ಹನುಮಂತರಾಯಪ್ಪ | 07.07.53 | 03.01.79 | 19.08.2002 | - |
| 66. | 400 | ಆರ್. ವೆಂಕಟರಾಮು | 06.09.49 | 14.12.78 | 19.08.2002 | - |
| 67. | 401 | ಡಿ. ಶಂಕರ್ | 24.02.49 | 29.11.78 | 19.08.2002 | - |
| 68. | 403 | ಎನ್. ಕುಮಾರಸ್ವಾಮಿ | 05.03.52 | 14.12.78 | 19.08.2002 | - |
| 69. | 407 | ಎ. ದೇವಪ್ರಕಾಶ್ | 13.06.54 | 08.12.78 | 19.08.2002 | - |
| 70. | 374 | ಅಮೃತಬೆಟ್ಟದ | 03.04.52 | 29.12.78 | 11.09.2002 | - |
| 71. | 402 | ಬಸವಣ್ಣಪ್ಪ | 25.02.52 | 01.12.78 | 11.09.2002 | - |
| 72. | 408 | ಎಂ. ಶ್ರೀನಿವಾಸನ್ | 15.08.48 | 04.01.79 | 22.10.2002 | - |
| 73. | 409 | ಸಿ. ಜೋಸೆಫ್ | 03.05.52 | 07.12.78 | 22.10.2002 | - |
| 74. | 411 | ಕೆ. ವಿ. ಸೀತರಾಂ | 10.12.48 | 29.12.78 | 22.10.2002 | - |
| 75. | 404 | ಡಿ. ವೆಂಕಟೇಶಯ್ಯ | 25.09.53 | 08.12.78 | 20.11.2002 | - |

ಎಫ್. ಆರ್. ಸಂಬರಗಿ

ಪಿ.ಆರ್. 59

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು,1,2).

## LAW SECRETARIAT

**Sub:** Establishment of Special Court at Bangalore for trying the criminal cases against Kumari Jayalalitha and others, ordered to be transferred from XI Additional Sessions Judge (Special Court No.1) Chennai in the State of Tamilnadu, by Hon'ble Supreme Court of India.

**Read:**
1. Judgement dated: 18.11.2003 rendered by Hon'ble Supreme Court of India in transfer petition (Criminal) Nos. 77-78/2003
2. Letter No. LAW/ALS-3/787/2003 dated: 5.12.2003 addressed by the Government to the Registrar General, High Court of Karnataka, Bangalore.
3. Letter No. GOB (II) 313/2003 dated: 8.12.2003 addressed by the Registrar General, High Court of Karnataka, Bangalore, to the Chief Secretary, Government of Karnataka,
4. Note No. CM 1618 REP 03 dated: 23/24-12-2003 from the Hon'ble Chief Minister.
5. Letter No. LAW 151 LCE 03 dated: 26.12.2003 addressed to the Registrar General, High Court of Karnataka, Bangalore,
6. Letter No. GOB (II) 313/2003 dated 26.12.2003 addressed by the Registrar General, High Court of Karnataka, Bangalore, to the Chief Secretary, Government of Karnataka,

**Preamble:**

Hon'ble Supreme Court of India in its judgement referred at Sl. No.1, allowed the transfer petitions filed by Mr. K. Anbazhagan and transferred C.C. 7/97 and C.C. 2/01 pending on the file of XI Additional Sessions Judge (Special Court No.1), Chennai in the State of Tamilnadu to the Special Court to be constituted under the Prevention of Corruption Act, 1988 by the Government of Karnataka with directions

as to the place at which the said court is to be established and also as to the appointment of Special Judge and Special Public Prosecutor for the trial of the said cases.

Hon'ble High Court of Karnataka in its letter referred at No. 3 accepted the Government's proposal to establish the Special Court at City Civil Court Complex (Annexe), Bangalore and also indicated the staff and infrastructure requirements.

High Court's proposal regarding the staff and infrastructure requirements mentioned in the letter referred at Sl. No. 3 and the High Court's proposal regarding appointment of Special Judge as per letter at Sl. No. 4 has been examined in detail by the Government and the following orders are issued with concurrence of Finance Department vide its Note No. FD 1562 Exp. 7/2003 dated: 16.12.2003.

**Order No. LAW 151 LCE 2003, Bangalore, dated: 27th December 2003**

After careful consideration of all relevant facts explained in the preamble and in exercise of powers conferred under Section 9 of Criminal Procedure Code read with Section 3 of the Prevention of Corruption Act, 1988, sanction is hereby accorded for the establishment of Special Court at Bangalore (to be named as XXXVI Additional City Civil and Sessions Court) for the trial of criminal cases against Kumari Jayalalitha and others, transferred from XI Additional Sessions Judge (Special Court No. 1), Chennai in the State of Tamilnadu, by Hon'ble Supreme Court of India.

The venue of the Special Court shall be at City Civil Court Complex (Annexe), behind Cauvery Bhavan, Palace Road, Bangalore.

Sri A. S. Pachhapure, District and Sessions Judge on O.O.D. as Registrar (Vigilance), High Court of Karnataka, is hereby appointed as Special Judge for trying the above cases.

The Court shall start functioning with effect from the date on which the Special Judge assumes office. A separate G.O. will be issued regarding appointment of Special Public Prosecutor.

Sanction is hereby accorded for filling the following posts on contract basis as done in case of Fast Track Courts

| | | |
|---|---|---|
| 1) | Judgement Writers | -2 |
| 2) | Tamil Language Interpreter | -1 |
| 3) | F.D.A. | -3 |
| 4) | Typist (Knowing Tamil) | -2 |
| 5) | Attenders | -2 |
| 6) | Peons | -2 |
| 7) | Security Guards | -4 |
| 8) | Driver | -1 |

Sanction is also hereby accorded for the purchase of following items:

| | | |
|---|---|---|
| 1) | Computer (Printer E.P.) | -1 |
| 2) | Typewriter | -2 |
| 3) | Scanner | -1 |
| 4) | Copier | -1 |

The Director of Printing, Stationery and Publications, Bangalore, is authorised to supply the required quantity of Stationery articles, forms, seals, registers, Karnataka Gazette (all parts), etc., to the above said newly created court.

The expenditure on account of establishment of newly created court, purchase of furniture (as per rules,) etc., and other required facilities shall be incurred under the head of account "2014-00-105-0-09-Est. of Special Court conducting trial Kum. Jayalalitha & Others-059", wherein Rs.50 lakhs is provided.

This order is issued with concurrence of Finance Department vide its Note. No. FD 1562 Exp.7/2003 dated: 16.12.2003.

By Order and in the name of Governor of Karnataka,
**A. P. RAMAKRISHNA**
Under Secretary to Government, (I/C)
Law Department (Admn-1).

PR-60

**Sub :** Shri Mariswamy Gowda, Public Prosecutor of III Additional District Judge, Mysore to Conduct SC. No. 112/95 on the file of II Fast Track Court, Mysore.

**Read :** Your letter No. DPN/ADM/171-2003-04 dated: 22.11.03.

**Government Order No. LAW 2253 LMC 03, Bangalore Dated: 8th January 2004**

Government are pleased to appoint the Public Prosecutor attached to the Court of III Additional District Judge, Mysore as Special Public Prosecutor to Conduct trial in SC. No. 112/95 on the file of the II Additional Fast Track Court, Mysore with immediate effect.

By Order and in the name of the Governor of Karnataka,
**S. SRIDHARA**
Asst. Solicitor & Ex-Officio,
I/c.Under Secretary to Government,
Law Department (Lit-II).

PR-61

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಪ್ರಧಾನ ಕಾರ್ಯದರ್ಶಿ (ಸಾರಿಗೆ) ಒಳಾಡಳಿತ ಮತ್ತು ಸಾರಿಗೆ ಇಲಾಖೆ ಹಾಗೂ ಪೂರಕ ಸಿಬ್ಬಂದಿ ವರ್ಗದ ಹುದ್ದೆಗಳನ್ನು ದಿನಾಂಕ: 1.1.2004 ರಿಂದ 31.12.2004 ರವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ; ಸಿಆಸುಇ 3 ಸಸಿವಿ 92, ದಿನಾಂಕ: 9.4.1992
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 97, ದಿನಾಂಕ: 5.2.1998
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 99, ದಿನಾಂಕ: 12.4.1999
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 05 ಸಸಿವಿ 2000, ದಿನಾಂಕ: 11.4.2000
5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಸಿವಿ 2001, ದಿನಾಂಕ: 12.3.2001
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಸಸಿವಿ 2001, ದಿನಾಂಕ: 2.3.2002
7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 01 ಸಸಿವಿ 2003(1), ದಿನಾಂಕ: 21.2.2003
8) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2003, ದಿನಾಂಕ: 24.3.2003

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿನ ಹುದ್ದೆಯ ಪದಧಾರಕರ ಕಾಲಾವಧಿಯವರೆಗೆ ಅಪರ ಕಾರ್ಯದರ್ಶಿ ಹುದ್ದೆಯೊಂದನ್ನು ಆಪ್ತ ಸಿಬ್ಬಂದಿ ವರ್ಗವನ್ನು ಕೂಡ ಸೃಜಿಸಲಾಗಿತ್ತು. ದಿನಾಂಕ: 22.2.1992 ರಿಂದ ಜಾರಿಗೆ ಬರುವಂತೆ ಸೃಜಿಸಲಾದ ಈ ಹುದ್ದೆಯ ಚಾಲ್ತಿಯು ಪದಧಾರಕ ಶ್ರೀ ಹನುಮಂತಪ್ಪನವರು ದಿನಾಂಕ: 30.11.1997 ರಂದು ನಿವೃತ್ತರಾಗುವವರೆಗೆ ಆಪ್ತ ಸಿಬ್ಬಂದಿ ವರ್ಗದೊಡನೆ ಇದ್ದು, ದಿನಾಂಕ: 30.11.1997ರ ನಂತರ ತಂತಾನೆ ರದ್ದುಗೊಂಡಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಸಾರಿಗೆ ವಿಷಯಗಳನ್ನು ನಿರ್ವಹಿಸಲು ಭಾರತೀಯ ಸೇವೆ ಸೂಪರ್ ಟೈಂ ಸ್ಕೇಲ್‌ನ ಕಾರ್ಯದರ್ಶಿ ಹುದ್ದೆಯೊಂದನ್ನು ಒಂದು ವರ್ಷದ ಅವಧಿಗೆ ಕೆಳಕಂಡ ಆಪ್ತ ಸಿಬ್ಬಂದಿ ವರ್ಗದೊಡನೆ ಸೃಜಿಸಲಾಗಿದೆ.

| | | |
|---|---|---|
| 1. | ಭಾಷಾಂತರಕಾರರು (ಹಿರಿಯ ಸಹಾಯಕ: ಶಾಖಾಧಿಕಾರಿ) | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕರು | 1 ಹುದ್ದೆ |
| 4. | ವಾಹನ ಚಾಲಕರು | 1 ಹುದ್ದೆ |
| 5. | ದಲಾಯತ್ | 2 ಹುದ್ದೆಗಳು |

ಕ್ರಮ ಸಂಖ್ಯೆ (3) (4) (5) (6)ರ ಸರ್ಕಾರದ ಆದೇಶಗಳಲ್ಲಿ ಮೇಲ್ಕಂಡ ಹುದ್ದೆಗಳನ್ನು ದಿನಾಂಕ: 4.2.2003 ರವರೆಗೆ ಮುಂದುವರೆಸಲಾಗಿದೆ. ಕ್ರಮ ಸಂಖ್ಯೆ (7)ರ ಸರ್ಕಾರಿ ಆದೇಶದಲ್ಲಿ ಕಾರ್ಯದರ್ಶಿ (ಸಾರಿಗೆ) ಒಳಾಡಳಿತ ಮತ್ತು ಸಾರಿಗೆ ಇಲಾಖೆ ಹುದ್ದೆಯನ್ನು ದಿನಾಂಕ: 2.12.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪ್ರಧಾನ ಕಾರ್ಯದರ್ಶಿ (ಸಾರಿಗೆ) ಒಳಾಡಳಿತ ಮತ್ತು ಸಾರಿಗೆ ಇಲಾಖೆ ಹುದ್ದೆಗೆ ಉನ್ನತೀಕರಿಸಲಾಗಿದೆ. ಸದರಿ ಹುದ್ದೆಗೆ ಕಾರ್ಯದರ್ಶಿಗಳ ಆಪ್ತ ಶಾಖೆಗೆ ನಿಗದಿಪಡಿಸಿರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೀಮಿತಗೊಳಿಸಿ ಮುಂದುವರೆಸಲಾಗಿದೆ. ಹಾಗೂ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ: 24.3.2003ರ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 31.12.2003 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿರುತ್ತದೆ.

ಪ್ರಸ್ತುತ ಈ ಹುದ್ದೆಗಳನ್ನು ದಿನಾಂಕ: 1.1.2004 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 98 ಸಸಿವಿ 2003, ಬೆಂಗಳೂರು, ದಿನಾಂಕ: 5ನೇ ಜನವರಿ 2004**

ಸರ್ಕಾರದ ಪ್ರಧಾನ ಕಾರ್ಯದರ್ಶಿ (ಸಾರಿಗೆ), ಒಳಾಡಳಿತ ಮತ್ತು ಸಾರಿಗೆ ಇಲಾಖೆ ಹುದ್ದೆ ಹಾಗೂ ಕೆಳಕಂಡ ಆಪ್ತ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.1.2004 ರಿಂದ ದಿನಾಂಕ: 31.12.2004 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಭಾಷಾಂತರಕಾರರು (ಹಿರಿಯ ಸಹಾಯಕ: ಶಾಖಾಧಿಕಾರಿ) | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕರು | 1 ಹುದ್ದೆ |
| 4. | ವಾಹನ ಚಾಲಕರು | 1 ಹುದ್ದೆ |
| 5. | ದಲಾಯತ್ | 2 ಹುದ್ದೆಗಳು |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2).

ಪಿ.ಆರ್. 62

